# ಮುಂಜಾವು

ವಾರಪತ್ರಿಕೆ.

ಸಂಪಾದಕ: ಸಿರಿಮನೆ ನಾಗರಾಜ್

ರಿಜಿಸ್ಟರ್ಡ್ ನಂ. ಆರ್‌ಎನ್‌ಎಸ್ - 19

4ನೇ ವರ್ಷ 45ನೇ ಸಂಚಿಕೆ ಕೊಪ್ಪ 20-7-1986 ಭಾನುವಾರ ಬೆಲೆ 40 ಪೈಸೆ




ಸಾವಿರಾರು ಎಳೆಯರ ಎಣೆಯಿಲ್ಲದ ಉತ್ಸಾಹ :

## ಜಡಿಮಳೆಯಲ್ಲಿ 'ಮಕ್ಕಳ ವನಮಹೋತ್ಸವ'

**ಸುಮಾರು 15 ಎಕರೆ ವಿಸ್ತಾರದ ಹರಂದೂರು ಗ್ರಾಮದ ಬೋಳು ಬಯಲು ಇದ್ದಕ್ಕಿದ್ದಂತೆ ಬಣ್ಣ ಬಣ್ಣದ ಹೂಗಳನ್ನರಳಿಸಿಕೊಂಡು ಕಂಗೊಳಿಸಿತು. ಈ ಸಾವಿರಾರು ಬಣ್ಣ ಬಣ್ಣದ ಹೂವುಗಳು ಮತ್ತಾರೂ ಅಲ್ಲ— "ಮಕ್ಕಳ ವನ ಮಹೋತ್ಸವ"ದಂದು "ನಾಳೆಯ ಹೆಮ್ಮರ" ನೆಡಲು ಬಂದಿದ್ದ "ನಾಳೆಯ ವನಪ್ರೇಮಿ ಪ್ರಜೆ"ಗಳಾಗಿದ್ದರು.**

**ಸುರಿಯುವ ಜಡಿಮಳೆ ಮಕ್ಕಳ ಎಣೆಯಿಲ್ಲದ ಉತ್ಸಾಹಕ್ಕೇನೂ ತಣ್ಣೀರೆರಚದಾಯಿತು. ಬೆಳಗಿನ ಮಳೆ-ಚಳಿಯಲ್ಲೂ ಛತ್ರಿ ಬಿಡಿಸಿಕೊಂಡಾದರೂ ಸಾವಿರಾರು ಮಕ್ಕಳು ಗುಡ್ಡದ ತುಂಬ ತುಂಬಿಕೊಂಡು ತಮ್ಮ ಕಾಯಕ ನೆರವೇರಿಸಿದರು.**

ಈ ಸುಂದರ, ಸ್ಮರಣೀಯ ಸಂದರ್ಭವನ್ನು ಅರಣ್ಯ ಇಲಾಖೆಯವರು ವಿದ್ಯಾ ಇಲಾಖೆ ಮತ್ತು ಲಯನ್ಸ್‌ಕ್ಲಬ್ ನೆರವಿನೊಂದಿಗೆ ಜು. 19ರಂದು ಏರ್ಪಡಿಸಿದ್ದರು. ಶಾಸಕ ಗೋವಿಂದ ಗೌಡರು ಈ ಕಾರ್ಯಕ್ರಮ ಉದ್ಘಾಟಿಸಿದರು.

ಅನಂತರ ಪಿ. ಜಿ. ಗುರ್ಜರ್‌ರವರ ಅಧ್ಯಕ್ಷತೆಯಲ್ಲಿ ನಡೆದ ಸಮಾರಂಭದಲ್ಲಿ ಮನಮೋಹನ ಕಲ್ಲೆ ನಾಗರಿಕರಿಗೆ ಸಸಿಗಳನ್ನು ಹಂಚಿದರು. ಹೆಚ್. ಎಂ. ಮಲ್ಲಯ್ಯ ಮತ್ತು ಕಾನ್ವೆಂಟ್ ಮುಖ್ಯೋಪಾಧ್ಯಾಯಿನಿ ಸಿಸ್ಟರ್ ಎಂ. ಗರ್‌ಟ್ರೂಡ್ ಮುಖ್ಯ ಅತಿಥಿಗಳಾಗಿದ್ದರು. ಸ|| ಅರಣ್ಯ ಸಂರಕ್ಷಣಾಧಿಕಾರಿ ಎ.ಬಿ. ಅಪ್ಪಣ್ಣ ಮುಖ್ಯಮಂತ್ರಿಗಳ ಸಂದೇಶ ಓದಿದರು.

ಸ್ವಾಗತದೊಂದಿಗೆ ಪ್ರಾಸ್ತಾವಿಕ ಭಾಷಣ ಮಾಡಿದ ವಿನಯ್ ಲೂಥ್ರ, ಅರಣ್ಯ ಉಳಿಸುವ, ಬೆಳೆಸುವ ಖಚಿತ ಭರವಸೆಯ ಪ್ರಯತ್ನವಾಗಿ 3 ವರ್ಷದ ಹಿಂದೆ ರಾಜ್ಯ ಸರ್ಕಾರ ಆರಂಭಿಸಿದ 'ಶಾಲಾ ವನ' ಯೋಜನೆಯ ಮುಂದುವರಿಕೆಯಾಗಿ ಈ ವರ್ಷ ರಾಜ್ಯಾದ್ಯಂತ ಈ 'ಮಕ್ಕಳ ವನಮಹೋತ್ಸವ' ಕಾರ್ಯಕ್ರಮ ಹಮ್ಮಿಕೊಳ್ಳಲಾಗಿದೆ ಎಂದರು.

ಗೋವಿಂದ ಗೌಡ, ಹೆಚ್.ಎಂ. ಮಲ್ಲಯ್ಯ ಮತ್ತು ಮನಮೋಹನ ಕಲ್ಲೆ ಸಾಂದರ್ಭಿಕವಾಗಿ ಮಾತನಾಡಿ ಅರಣ್ಯವುಳಿಸಿ-ಬೆಳೆಸುವಲ್ಲಿ ಜನರ ಪಾತ್ರ ಮತ್ತು ಸಹಕಾರದ ಅಗತ್ಯವನ್ನು ಒತ್ತಿ ಹೇಳಿದರು..

ಸಭೆಗೆ ಬಂದಿದ್ದ ನೂರಾರು ಮಕ್ಕಳಿಗೆ ಅರ್ಥವಾಗುವಂತೆ ಸರಳವಾಗಿ ಅರಣ್ಯದ ಮಹತ್ವ ವಿವರಿಸಿ ಸಮಾರಂಭಕ್ಕೆ ಅತ್ಯಂತ ಉದ್ದೇಶಪೂರ್ಣತೆ ತಂದುಕೊಟ್ಟವರು ಸಿಸ್ಟರ್ ಗರ್‌ಟ್ರೂಡ್. "ಜನಸೇವೆಯೇ ಜನಾರ್ದನ ಸೇವೆ ಎಂದರು ಗಾಂಧೀಜಿ. ವನ ರಕ್ಷಣೆಯೂ ಒಂದು ಜನಸೇವೆ. ಕಾಡಿನಿಂದ ನಮ್ಮೆಲ್ಲ ದಿನನಿತ್ಯದ ಅಗತ್ಯಗಳು ಪೂರೈಸುವುದರ ಜೊತೆಗೆ ಉತ್ತಮ ಮಳೆಯಾಗುವುದು, ಪರಿಸರ ಮಾಲಿನ್ಯ ತಡೆಗಟ್ಟುವುದು– ಈ ಎಲ್ಲದಕ್ಕೆ ಕಾಡು ಬೇಕು. ಆದರೂ ವ್ಯಾಪಾರ ಮನೋಭಾವ, ದುರಾಸೆ, ಕಳ್ಳತನಗಳಿಂದ ಕಾಡು ನಾಶವಾಗುತ್ತಿದೆ. ಇದು ಹೆತ್ತವರನ್ನು ಕೊಂದಂತೆ. ಕಾಡಿನ ನಾಶದಿಂದ ನಾಡಿನ ಮರಣವನ್ನು ತಂದಂತೆ ಆಗುತ್ತದೆ. ತಾಯಿ ಮಗುವನ್ನು ಆರೈಕೆ ಮಾಡಿದಂತೆ ನಾವೂ ಸಸಿ ನೆಟ್ಟು ಪ್ರೀತಿಯಿಂದ ಬೆಳೆಸಬೇಕು. ವೃಕ್ಷ ರಕ್ಷಣೆಯಿಂದಲೇ ದೇಶದ ರಕ್ಷಣೆ" ಎಂಬ ಅವರ ಭಾಷಣಕ್ಕೆ ಮಕ್ಕಳು ದೀರ್ಘ ಕರತಾಡನ ಮಾಡಿ ತಮ್ಮ ಮೆಚ್ಚುಗೆ, ಸಮ್ಮತಿ ಸೂಚಿಸಿದರು.

ಗುರ್ಜರ್ ಅಧ್ಯಕ್ಷ ಭಾಷಣ ಮಾಡುತ್ತಾ, ವಿಶ್ವದಲ್ಲಿ ಭೂಮಿ, ನೀರು, ಅರಣ್ಯ ಇವೆಲ್ಲ ಇಂತಿಷ್ಟು ಪ್ರಮಾಣದಲ್ಲಿರಬೇಕೆಂಬ ಲೆಕ್ಕಾಚಾರ ನಾಗರಿಕತೆ ಬೆಳೆದಂತೆ ತಪ್ಪಿಹೋಗಿದೆ. ನಾಗರಿಕರಿಗೆ ಪ್ರಿಯವಾದ ಸಸಿಗಳನ್ನು ಒದಗಿಸುವ ಮೂಲಕ ಇಲಾಖೆ ಅರಣ್ಯ ಸಂರಕ್ಷಣೆಯಲ್ಲಿ ನಾಗರಿಕರನ್ನು ತೊಡಗಿಸುವತ್ತ ಇಟ್ಟಿರುವ ಹೆಜ್ಜೆ ಯಶಸ್ವಿಯಾಗಲಿ ಎಂದರು.

ಲಯನ್ಸ್ ಅಧ್ಯಕ್ಷ ಶಿರೀಷ್ ಗುರ್ಜರ್ ವಂದಿಸಿದರು. ಮಕ್ಕಳಿಗೆ ಸಿಹಿ ಹಂಚಲಾಯಿತು.

ಕೊಪ್ಪ ಲಯನ್ಸ್ ಕ್ಲಬ್

## ನೂತನ ಅಧ್ಯಕ್ಷರಾಗಿ ಶಿರೀಷ್ ಗುರ್ಜರ್

ಕೊಪ್ಪ: ಇಲ್ಲಿನ ಲಯನ್ಸ್ ಕ್ಲಬ್‌ಗೆ 1986-87ನೇ ಸಾಲಿಗೆ ಅಧ್ಯಕ್ಷರಾಗಿ ಶಿರೀಷ್ ಪಿ. ಗುರ್ಜರ್ ಆಯ್ಕೆಯಾಗಿದ್ದಾರೆ. ಅಂದಗಾರಿನ ಎ.ಜಿ. ಸುಬ್ರಹ್ಮಣ್ಯ ಕಾರ್ಯದರ್ಶಿಯಾಗಿದ್ದಾರೆ.

ಈಚಿನ ವರ್ಷಗಳಲ್ಲಿ ಕೊಪ್ಪ ಲಯನ್ಸ್ ಕ್ಲಬ್ ಹಲವಾರು ಸಾಮಾಜಿಕ ಕಾರ್ಯಕ್ರಮಗಳನ್ನು ನಡೆಸುತ್ತ ಉತ್ತಮ ಮುನ್ನಡೆ ಸಾಧಿಸುತ್ತಿದೆ. 2 ವರ್ಷದ ಹಿಂದೆ ಡಾ|| ಮೋಹನಶೆಟ್ಟರು ಅಧ್ಯಕ್ಷರಾಗಿದ್ದಾಗ (ಕಾರ್ಯದರ್ಶಿ ಗೋಪಾಲಕೃಷ್ಣಶೆಟ್ಟಿ) ವರ್ಷವಿಡೀ ಎಡೆಬಿಡದೆ ಹಲವಾರು ಜನಹಿತ ಕಾರ್ಯಗಳನ್ನು ನಡೆಸಿ, ವರ್ಷಾಂತ್ಯದಲ್ಲಿ ವಿಪುಲವಾದ ಪ್ರಶಸ್ತಿ – ಪ್ರಶಂಸೆಗಳ ಸುರಿಮಳೆ ಪಡೆಯಿತು.

ಕಳೆದ ವರ್ಷ ಪ್ರಭಾಕರ ಆರ್. ಕಲ್ಲೆ ಅಧ್ಯಕ್ಷರಾಗಿ, ಕೆ.ಎಸ್. ರಾಮಣ್ಣ ಕಾರ್ಯದರ್ಶಿಯಾಗಿ ಐತಿಹಾಸಿಕ ಕಣ್ಣಿನ ಶಸ್ತ್ರ ಚಿಕಿತ್ಸಾ ಶಿಬಿರ ನಡೆಸಿ 'ಸೈ' ಎನ್ನಿಸಿಕೊಂಡಿದ್ದಲ್ಲದೆ, 10,000 ರೂ. ಗಳ ಬಹುಮಾನವನ್ನೂ ಗೆದ್ದರು.

ಈಗ ಆಯ್ಕೆಯಾಗಿರುವ ಅಧ್ಯಕ್ಷ-ಕಾರ್ಯದರ್ಶಿಗಳು ಸಹ ಅತ್ಯಂತ ಉತ್ಸಾಹಿಗಳೂ ಸಾಮಾಜಿಕ ಚಟುವಟಿಕೆಯಲ್ಲಿ ನುರಿತವರೂ ಆಗಿದ್ದಾರೆ. ಇವರುಗಳ ನೇತೃತ್ವದಲ್ಲಿ ಕ್ಲಬ್ ಮಾಡಬಹುದಾದ ಅಸಂಖ್ಯ ಜನಹಿತ ಕಾರ್ಯಗಳಿವೆ; ಕ್ಲಬ್ಬಿಗೆ ಸಾಧಿಸಿ ಕೊಡಬಹುದಾದ ದೊಡ್ಡ ದೊಡ್ಡ ಮೈಲಿಗಲ್ಲುಗಳಿವೆ.

ಅಂದ ಹಾಗೆ, ಶಿರೀಷ್‌ರವರ ತಂದೆ ಪಿ. ಜಿ. ಗುರ್ಜರ್‌ರವರು ಕೊಪ್ಪ ಲಯನ್ಸ್‌ನ ಸಂಸ್ಥಾಪಕ ಅಧ್ಯಕ್ಷರೂ ಹೌದು. ಅಷ್ಟೇ ಅಲ್ಲ, ಅದೇ ವರ್ಷ ಜಿಲ್ಲಾ ಗೌರ್ನರ್ ಸಹ ಆಗಿ ದಾಖಲೆ ಸ್ಥಾಪಿಸಿದವರು.

(4ನೇ ಪುಟಕ್ಕೆ)

## ಕೊಪ್ಪ ತಾ||ಗೆ ಕುಟುಂಬ ಯೋಜನೆಅದೃಷ್ಟಬಹುಮಾನ

ಕೊಪ್ಪ: ರಾಷ್ಟ್ರೀಯ ಕುಟುಂಬ ಕಲ್ಯಾಣ ಯೋಜನೆಯನ್ನು ಹೆಚ್ಚು ಹೆಚ್ಚು ಯಶಸ್ವಿಗೊಳಿಸುವುದಕ್ಕಾಗಿ ಸರ್ಕಾರ ಸಂತಾನಹರಣ ಶಸ್ತ್ರ ಚಿಕಿತ್ಸೆಗೊಳಗಾದವರಿಗೆ ಅದೃಷ್ಟ ಬಹುಮಾನ ಯೋಜನೆಯನ್ನು ಜಾರಿಗೆ ತಂದಿದೆ. 1986ರ ಜೂನ್ ತಿಂಗಳಲ್ಲಿ ಈ ಯೋಜನೆಯ 6ನೇ ಬಹುಮಾನ ಕೊಪ್ಪ ತಾಲ್ಲೂಕಿಗೆ ಬಂದಿರುವುದಾಗಿ ವೈದ್ಯಾಧಿಕಾರಿಗಳು ತಿಳಿಸಿದ್ದು, ಹೆಚ್ಚು ಹೆಚ್ಚು ಜನ ಅರ್ಹರು ಸಂತಾನ ಹರಣ ಶಸ್ತ್ರ ಚಿಕಿತ್ಸೆ ಮಾಡಿಸಿಕೊಂಡು ಯೋಜನೆಯ ಯಶಸ್ಸಿಗೆ ನೆರವಾಗಬೇಕೆಂದು ಕೋರಿದ್ದಾರೆ.

ಜೂನ್ ತಿಂಗಳ ಈ ಬಹುಮಾನ 1000 ರೂ. ಪಡೆದವರು ಶ್ರೀಮತಿ ಹೇಮಾವತಿ ಕೋಂ ಸುಧಾಕರ, ಶಂಕರಮನೆ, ಕೊಪ್ಪ ತಾಲ್ಲೂಕು.

### ಸಂತಾನಹರಣಶಸ್ತ್ರ ಚಿಕಿತ್ಸಾ ಶಿಬಿರಗಳು

ಚಿಕ್ಕಮಗಳೂರು: ಈ ತಿಂಗಳ 23ರಂದು ಬಾಳೆಹೊನ್ನೂರು, 25 ನ.ರಾ. ಪುರ, 26 ಜಯಪುರ, ಶೃಂಗೇರಿ, 29 ಕಮ್ಮರಡಿ, ಮುತ್ತಿನಕೊಪ್ಪ—ಈ ಸ್ಥಳಗಳಲ್ಲಿ ಸಂತಾನ ಹರಣ ಶಸ್ತ್ರ ಚಿಕಿತ್ಸಾ ಶಿಬಿರಗಳು ನಡೆಯಲಿವೆ.

## ನೇಣು ಹಾಕಿಕೊಂಡು ಮೃತ್ಯು

ಕೊಪ್ಪ: ಸಮೀಪದ ಭಂಡಾರ ಎಸ್ಟೇಟಿನಲ್ಲಿ ಹನುಮಂತಪ್ಪ (35) ಎಂಬ ತೋಟ ಕಾರ್ಮಿಕ ಜೀವನದಲ್ಲಿ ಜಿಗುಪ್ಸೆಗೊಂಡು ಜು. 19ರಂದು ನೇಣು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಂಡಿರುವುದಾಗಿ ತಿಳಿದು ಬಂದಿದೆ.

### ಅ ಪ ಘಾ ತ

ಜುಲೈ 19ರಂದು ಸಿಂಡಿಕೇಟ್ ಬ್ಯಾಂಕ್ ಬಳಿ ಆಟೋರಿಕ್ಷಾವೊಂದು ತಗುಲಿ ರಸ್ತೆಬದಿ ನಿಂತಿದ್ದ ಬಾಲಕನೊಬ್ಬ ಗಾಯಗೊಂಡು ಆಸ್ಪತ್ರೆಯಲ್ಲಿ ಚಿಕಿತ್ಸೆ ಕೊಡಿಸಲಾಗಿದ್ದು, ಯಾವುದೇ ದೂರು ದಾಖಲಾಗಿಲ್ಲವೆನ್ನಲಾಗಿದೆ.

## ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ

ಕೊಪ್ಪ ವಿಭಾಗ, ಕೊಪ್ಪ

### ಕಛೇರಿ ಸ್ಥಳಾಂತರ

ಮೇಲ್ಕಂಡ ಕಛೇರಿಯನ್ನು ಈವರೆಗಿನ ಬಾಳಗಡಿ ರಸ್ತೆಯಲ್ಲಿದ್ದ ಕಟ್ಟಡದಿಂದ ಹಾಲಿ ಕೊಪ್ಪ-ತೀರ್ಥಹಳ್ಳಿ ರಸ್ತೆಯಲ್ಲಿ ನೂತನವಾಗಿ ಕಟ್ಟಲಾಗಿರುವ ಇಲಾಖೆಯ ಸ್ವಂತ ಕಟ್ಟಡಕ್ಕೆ ಸ್ಥಳಾಂತರಿಸಲಾಗಿದೆ. ಕಛೇರಿಯು ನೂತನ ಆವರಣದಲ್ಲಿ ತಾರೀಖು 17-7-1986ರಿಂದಲೇ ಕಾರ್ಯಾರಂಭ ಮಾಡಿದೆ. ಸಾರ್ವಜನಿಕರು ಈ ವಿಚಾರವನ್ನು ಗಮನಿಸಲು ಕೋರಿದೆ.

ಉಪ ಅರಣ್ಯ ಸಂರಕ್ಷಣಾಧಿಕಾರಿಗಳು,
ಕೊಪ್ಪ ವಿಭಾಗ, ಕೊಪ್ಪ.

# "ಹೋಬಳಿಗೊಂದು ವಸತಿ-ಶಾಲೆ"

## —ಸರ್ಕಾರಕ್ಕೊಂದು ಮನವಿ



ಮಾನ್ಯರೇ,

ಸ್ವಾತಂತ್ರ್ಯ ನಂತರ ನಾಲ್ಕು ದಶಕಗಳೇ ಸರಿದು ಹೋಗಿದ್ದರೂ ಈ ಕುರಿತು ಇನ್ನೂ ಮನವಿ ಸಲ್ಲಿಸಬೇಕಾದ ದೌರ್ಭಾಗ್ಯಕ್ಕೆ ದಲಿತ ಸಂಘರ್ಷ ಸಮಿತಿ ವಿಷಾದಿಸುತ್ತದೆ. ಈ ಅವಧಿಯಲ್ಲಿ ಗ್ರಾಮೀಣ ಬಡ, ದಲಿತ ಮಕ್ಕಳ ಸರ್ವಾಂಗೀಣ ಶಿಕ್ಷಣ, ವಿಕಾಸಕ್ಕೆ ಸರ್ಕಾರ ಕೊಡಬೇಕಾದ ಪ್ರಾಮುಖ್ಯತೆ ನೀಡಿಲ್ಲ. ಅಷ್ಟೇಕೆ, ಕತ್ತಲ ಕೂಪದಲ್ಲಿ ಕಮರಿ ಹೋಗುತ್ತಿರುವ ಹಳ್ಳಿ ಮಕ್ಕಳ ಶಿಕ್ಷಣಕ್ಕಾಗಿ ಸಮಗ್ರ ಅಧ್ಯಯನ ಯೋಜನೆ ಕೂಡ ರೂಪುಗೊಂಡದ್ದು ನಮ್ಮ ಗಮನಕ್ಕೆ ಬಂದಿಲ್ಲ.

ಚುನಾವಣೆಗಳನ್ನಷ್ಟೇ ದೃಷ್ಟಿಯಲ್ಲಿಟ್ಟುಕೊಳ್ಳುವ ಆಳುವ ಸರ್ಕಾರಗಳು ಕುರಿ, ಕೋಳಿ, ತಾಳಿ, ಸಾಲದಂತಹ ಅರೆಬರೆ ಯೋಜನೆಗಳ ಕನ್ನಡಿಯಲ್ಲಿನ ಗಂಟು ತೋರಿಸಿ, ಅನಕ್ಷರಸ್ಥ ಜನ ಸಮುದಾಯವನ್ನು ವಂಚಿಸುತ್ತಾ ಬಂದಿವೆ. ಇದಕ್ಕೆ 'ಮೌಲ್ಯಾಧಾರಿತ' ಜನತಾ ಪಕ್ಷವೂ ಹೊರತಲ್ಲ. ಕರ್ನಾಟಕದ ಜನತಾ ಸರ್ಕಾರ ಕೂಡ ಈ ವಂಚನೆ ಕಾರ್ಯವನ್ನು ಮುಂದುವರೆಸುತ್ತಿದೆ.

ಹಳ್ಳಿಗಾಡಿನ ಬಡ ಮಕ್ಕಳಲ್ಲಿ ನೂರರಲ್ಲಿ 6 ಮಕ್ಕಳು ಮಾತ್ರ ಶಾಲೆಗೆ ದಾಖಲಾಗುತ್ತಿವೆ. ಇದು ಸಮೀಕ್ಷೆಯೊಂದರ ಅಂಕಿ–ಅಂಶ. ಯಾವುದೇ ನಾಗರಿಕ ಸರ್ಕಾರ, ಸಮಾಜ ನಾಚಿಕೆಯಿಂದ ತಲೆ ತಗ್ಗಿಸಬೇಕಾದ ಸಂಗತಿ ಇದು. ಬಡವರ ಹೆಂಡದ ಹಣವನ್ನು, ತೆರಿಗೆಯ ಹಣವನ್ನು ನಾನಾ ಅನಗತ್ಯ ಯೋಜನೆಗಳಿಗೆ ನೀರಿನಂತೆ ಬಳಸುವ ಸರ್ಕಾರ ಅವರ ಮಕ್ಕಳಿಗೆ ಕನಿಷ್ಠ ವಿದ್ಯೆಯನ್ನು ನೀಡಲು ಮುಂದಾಗುತ್ತಿಲ್ಲ.

ಹಳ್ಳಿಗಾಡಿನಲ್ಲಿ ತಾಂಡವವಾಡುತ್ತಿರುವ ಹಸಿವು, ದಾರಿದ್ರ್ಯಗಳಿಂದಾಗಿ ನೂರಕ್ಕೆ 95 ಮಕ್ಕಳು ಶಾಲೆಯ ಮುಖವನ್ನೇ ಕಾಣುತ್ತಿಲ್ಲ. ಶಾಲೆಗೆ ಸೇರುವ ಮಕ್ಕಳಲ್ಲಿ ಕೂಡ ಮುಂದೆ ಎರಡು ಹೊತ್ತಿನ ಊಟ ದೊರೆಯದ ಕಾರಣ ಅನೇಕರು ಶಾಲೆ ತೊರೆಯುತ್ತಿದ್ದಾರೆ. ಹೀಗಾಗಿ ದೇಶ ಮೊಟ್ಟ ಮೊದಲು ಹೊಡೆದಟ್ಟಬೇಕಾದ ಅನಕ್ಷರತೆ ದಿನೇ ದಿನೇ ಕಡಿಮೆಯಾಗುವ ಬದಲು ಅಧಿಕವಾಗುತ್ತಿದೆ.

ಈ ಎಲ್ಲ ಮಕ್ಕಳಿಗೆ ವಿದ್ಯೆ ನೀಡಲು ಇರುವ ಏಕೈಕ ಮಾರ್ಗ: ಕನಿಷ್ಠ ಹೋಬಳಿಗೊಂದು ವಸತಿ ಶಾಲೆ ತೆರೆಯುವುದೊಂದೇ. ಇಂತಹ ಶಿಕ್ಷಣ ಪದ್ಧತಿ ಜಾರಿಯಾಗದ ಹೊರತು ಕಡ್ಡಾಯ ಶಿಕ್ಷಣ ನೀತಿ, ವಯಸ್ಕರ ಶಿಕ್ಷಣ ಯೋಜನೆ ಅರ್ಥಹೀನ. ಸರ್ಕಾರ ನೀಡುವ ಕುರಿ, ಕೋಳಿ, ತಾಳಿ, ಸಾಲದ ಯೋಜನೆಗಳ ಭ್ರಷ್ಟಾಚಾರ, ದುರುಪಯೋಗಗಳಿಂದಾಗಿ ನಿರೀಕ್ಷಿತ ಫಲ ದೊರೆಯದೆ ನಿರರ್ಥಕವಾಗುತ್ತಿವೆ. ಕೇವಲ ಮತಗಳಿಕೆಯಷ್ಟೇ ಗುರಿಯಾದ ಇಂಥ ಯೋಜನೆಗಳು ('ಬಡವರ ಭೂಮಿಗೆ ನೀರು' ಯೋಜನೆಯ ಹೊರತು) ಬಡವರ ಭವಿಷ್ಯಕ್ಕಂತೂ ಬೆಳಕಾಗುತ್ತಿಲ್ಲ.

ಸರ್ಕಾರ 5 ವರ್ಷ ತುಂಬಿದ ಮಕ್ಕಳಿಗಾಗಿ 125 ವಸತಿ ಶಾಲೆ ನಡೆಸುತ್ತಿದೆ. ಇವುಗಳಲ್ಲಿ ಕೇವಲ 3,900 ಮಕ್ಕಳಿಗೆ ಮಾತ್ರ ವಿದ್ಯಾಭ್ಯಾಸದ ವ್ಯವಸ್ಥೆ ಇದೆ. 3 ವರ್ಷ 10 ತಿಂಗಳು ತುಂಬಿದ ಮಕ್ಕಳಿಗೆ ಪ್ರಾಥಮಿಕ ಶಾಲೆ ಸೇರುವ ತನಕ ಶಿಕ್ಷಣದಲ್ಲಿ ಆಸಕ್ತಿ ಮೂಡಿಸಲು 765 ಮಹಿಳಾ ಕಲ್ಯಾಣ ಕೇಂದ್ರಗಳನ್ನು ಸರ್ಕಾರ ನಡೆಸುತ್ತಿದೆ. ಇವುಗಳಲ್ಲಿ ಸುಮಾರು 40,000 ಮಕ್ಕಳಿಗೆ ಮಾತ್ರ ವಿದ್ಯೆಯ ವ್ಯವಸ್ಥೆ ಇದೆ.

ಬಡತನದ ಕಾರಣ ಶಾಲೆಗೆ ಸೇರದ, ಶಾಲೆ ಬಿಡುವ ಮಕ್ಕಳ ಸಂಖ್ಯೆಗೆ ಹೋಲಿಸಿದರೆ ಇದು ತೀರಾ ಗೌಣ. ಬೆಟ್ಟ ಮತ್ತು ನೆಲ್ಲಿಕಾಯಿಯನ್ನು ಹೋಲಿಸಿದಂತೆ ಆಗುತ್ತದೆ.

ಹೋಬಳಿಗೊಂದು ವಸತಿ–ಶಾಲೆ ತೆರೆಯುವಂತೆ ನಾವು 1985 ಏಪ್ರಿಲ್ 14ರಂದು ನಡೆದ ಅಂಬೇಡ್ಕರ್ ಜನ್ಮ ದಿನಾಚರಣೆಯ ಬೃಹತ್ ಸಮಾವೇಶದಲ್ಲಿ ಒತ್ತಾಯಿಸಿದ್ದೆವು.

ಆ ನಂತರ ಕೂಡ ಮೇಲಿಂದ ಮೇಲೆ ಒತ್ತಾಯಿಸಿದ್ದೆವು. ಆದರೆ ಸರ್ಕಾರ ಈ ಕುರಿತು ಸಮಗ್ರ ಯೋಜನೆ ರೂಪಿಸುವತ್ತ ಕಣ್ಣು ತೆರೆಯಲಿಲ್ಲ.

ನಾವು ಈ ಮೂಲಕ ಪ್ರತಿ ಹೋಬಳಿಗೊಂದು ಕನಿಷ್ಠ ನೂರು ಮಕ್ಕಳಿಗೆ ಪ್ರಾಥಮಿಕ ಶಿಕ್ಷಣ ನೀಡುವಂಥ ವಸತಿ–ಶಾಲೆ ತೆರೆಯುವಂತೆ ಮತ್ತೊಮ್ಮೆ ಒತ್ತಾಯಿಸುತ್ತೇವೆ. ನಮ್ಮ ಈ ಬೇಡಿಕೆ ಈಡೇರಿಸಲು ಮೊದಲ ಹಂತವಾಗಿ ಶಾಸಕ, ಸಚಿವರನ್ನು ಒತ್ತಾಯಿಸಲು ಈ ಮನವಿ ಸಲ್ಲಿಸುತ್ತಿದ್ದೇವೆ. ದಯಮಾಡಿ ಈಗಲಾದರೂ ಕಣ್ಣು ತೆರೆಯಿರಿ. ಕತ್ತಲ ಕೂಪದಲ್ಲಿ ಕರಗಿ ಹೋಗುತ್ತಿರುವ ಬಡ ದಲಿತ ಮಕ್ಕಳು ಕಣ್ಣು ತೆರೆಯಲು ಅನುವು ಮಾಡಿಕೊಡಿ. ಘೋರಪಾತಕದ ಭಾಗಿಗಳು ನಾವು ಎನ್ನುವ ಮುಂದಿನ ತಲೆಮಾರಿನ ಮಕ್ಕಳ ಶಾಪದಿಂದ ಮುಕ್ತರಾಗೋಣ.

ನಾವು ಈ ಮನವಿ ಸಲ್ಲಿಸಿದ ನಂತರ, ಜುಲೈ 31ರವರೆಗೂ ಕಾಯುತ್ತೇವೆ. ಅಷ್ಟರೊಳಗೆ ಸರ್ಕಾರ ಒಂದು ಅಧಿಕೃತ ಯೋಜನೆಯ ಹೇಳಿಕೆಯೊಂದಿಗೆ ಮುಂದೆ ಬರಬೇಕೆಂಬುದು ನಮ್ಮ ಹಂಬಲ. ಪ್ರತಿ ಶಾಸಕ ಕೂಡ, ತನ್ನ ಕ್ಷೇತ್ರದಲ್ಲಿ ಇಂಥ ವಸತಿ–ಶಾಲೆಗಳನ್ನು ತೆರೆಯುವ ನೈತಿಕ ಪ್ರಯತ್ನ ನಡೆಸಲಿ ಎಂಬುದು ನಮ್ಮ ಆಶಯ. ಇದರಂತೆ ಈ ಬಗ್ಗೆ ಸರ್ಕಾರದ ಗಮನ ಸೆಳೆಯಲು ಕಾರಣರಾಗುತ್ತೀರೆಂದು ನಂಬುತ್ತೇವೆ.

ದಯಮಾಡಿ ಇತ್ತ ಮನಸ್ಸು ಕೊಡಿ.

ರಾಜ್ಯ ಸಂಚಾಲಕರು,
**ಕರ್ನಾಟಕ ದಲಿತ ಸಂಘರ್ಷ ಸಮಿತಿ,**
ಬೆಂಗಳೂರು.

* * *

ಮೇಲ್ಕಂಡ ಮನವಿ ಸಲ್ಲಿಕೆ ಕಾರ್ಯಕ್ರಮದಲ್ಲಿ ದ. ಸಂ. ಸ. ಚಿಕ್ಕಮಗಳೂರು ಜಿಲ್ಲಾ ಶಾಖೆಯೂ ಪಾಲ್ಗೊಂಡಿದ್ದು, ಇಂಥ ವಸತಿ ಶಾಲೆಗಳನ್ನು ತೆರೆಯಲು ಸರ್ಕಾರವನ್ನು ಒತ್ತಾಯಿಸಬೇಕೆಂದು ಎಲ್ಲಾ ರಾಜಕೀಯ ಪಕ್ಷಗಳು, ಸಂಘ–ಸಂಸ್ಥೆಗಳು ಮತ್ತು ಸಾರ್ವಜನಿಕರಲ್ಲಿ ಮನವಿ ಮಾಡಿದೆ.

ಈ ಕುರಿತು ಜನ ಜಾಗೃತಿ ಮೂಡಿಸಲು ಜಿಲ್ಲೆಯ ವಿವಿಧ ಕಡೆಗಳಲ್ಲಿ ಜುಲೈ ತಿಂಗಳಲ್ಲಿ ನಡೆಸಲಾಗುವ ಸಭೆ ಮತ್ತು ಸಾಂಸ್ಕೃತಿಕ ಜಾಥಾಗಳಲ್ಲಿ ಸಹಕರಿಸುವಂತೆಯೂ ಸಮಿತಿ ಸಾರ್ವಜನಿಕರನ್ನು ವಿನಂತಿಸಿದೆ.

ಜುಲೈ ಕೊನೆಯೊಳಗೆ ಈ ಬಗ್ಗೆ ಸರ್ಕಾರ ಸ್ಪಷ್ಟ ಧೋರಣೆ ಪ್ರಕಟಿಸದಿದ್ದಲ್ಲಿ ಆಗಸ್ಟ್ ತಿಂಗಳಲ್ಲಿ ರಾಜ್ಯ ಸಮಿತಿಯ ಆದೇಶದಂತೆ ಚಳುವಳಿ ನಡೆಸಲಾಗುವುದೆಂದು ಜಿಲ್ಲಾ ಸಂಚಾಲಕ ಎಂ. ಡಿ. ಗಂಗಯ್ಯ ತಿಳಿಸಿದ್ದಾರೆ.

ಒಂದು ಮನೋವೈಜ್ಞಾನಿಕ ವಿಶ್ಲೇಷಣೆ :

# ಫಲವಂತತೆ ಮತ್ತು ಬಂಜೆತನ

ಫಲವಂತತೆ ಎಂದರೆ ಸಂತಾನೋತ್ಪತ್ತಿಯ ಶಕ್ತಿ. ಇದೊಂದು ನೈಸರ್ಗಿಕ ಕ್ರಿಯೆ. ಭೂ ಮಂಡಲದಲ್ಲಿರುವ ಪ್ರತಿಯೊಂದು ಜೀವಿಯ ತಳಿಯ ಉಳಿವಿಗೆ ಈ ಹುಟ್ಟಿಸುವ ಕ್ರಿಯೆ ಅವಶ್ಯಕವಾಗಿದೆ. ಆಯಾ ಜೀವಿಯ ಸ್ವರೂಪ, ಬದುಕಿನ ಪ್ರಮಾಣ, ರೀತಿ ಇತ್ಯಾದಿಗಳನ್ನು ಅನುಸರಿಸಿ ಈ ಕ್ರಿಯೆ ಬೇರೆ ಬೇರೆ ಪ್ರಮಾಣದಲ್ಲಿ ನಡೆದು; ಪ್ರಕೃತಿಯ ಜೈವಿಕ ಸಮತೋಲನವನ್ನು ಕಾಪಾಡುತ್ತದೆ. ಸ್ವಲ್ಪ ಕಾಲ ಬದುಕುವ ನೊಣಗಳಂಥ ಕೀಟಗಳು ಹೆಚ್ಚು ಮೊಟ್ಟೆ ಇಡುತ್ತವೆ. ಆನೆಯಂಥ ಬಲಿಷ್ಠ ಪ್ರಾಣಿ ಹತ್ತಾರು ವರ್ಷಕ್ಕೊಮ್ಮೆ ಹೆರುತ್ತದೆ. ಹೀಗೆಯೇ ಹುಟ್ಟಿಸುವ ಕ್ರಿಯೆ ನಿಸರ್ಗ ನಿಯಮಕ್ಕೆ ಪೂರಕವಾಗಿಯೇ ಸಾಗುತ್ತದೆ.

ಎಲ್ಲಾ ಜೀವಿಗಳಂತೆ ಮನುಷ್ಯನಲ್ಲೂ ಸಂತಾನವನ್ನು ಪಡೆಯುವ ಹುಟ್ಟಾಸೆ ಇರುತ್ತದೆ. ಮನುಷ್ಯ ಸಂತಾನವನ್ನು ಪಡೆಯುವುದರ ಮೂಲಕವಾಗಿ ತನ್ನ ಬದುಕಿನ ಸಾರ್ಥಕತೆಯನ್ನು ಕಂಡುಕೊಳ್ಳುತ್ತಾನೆ. ಅದರಲ್ಲೂ ಹಿಂದುಗಳಲ್ಲಿ ಸಂತಾನೋತ್ಪತ್ತಿ ಪ್ರಪಂಚದ ಉಳಿವಿಗೆ ಅವಶ್ಯಕ ಎಂಬ ನಂಬಿಕೆ ಇದೆ– ಎಂಬುದಾಗಿ ಪ್ರಸಿದ್ಧ ಮನೋವಿಜ್ಞಾನಿ ಎರಿಕ್ ಎರಿಕ್‌ಸನ್ ಹೇಳುತ್ತಾರೆ.

ಫಲವಂತತೆಯನ್ನು ಸಮಾಜ ಒಂದು ಬಹು ಮುಖ್ಯ ಮೌಲ್ಯವಾಗಿರಿಸಿಕೊಂಡಿದೆ. ಸಂತಾನೋತ್ಪತ್ತಿ ಹಾಗೂ ಅದರ ಪೋಷಣೆಗೆ ಪೂರಕವಾದ ವ್ಯವಸ್ಥೆಯುಳ್ಳ ಯಾವುದೇ ಸಮಾಜದಲ್ಲಿ ಸಂತಾನವನ್ನು ನಿರಾಕರಿಸುವ ವ್ಯಕ್ತಿಯು ನಿಂದನೆಗೆ ಗುರಿಯಾಗುತ್ತಾನೆ. 'ಬಾಲ' ಎಂಬ ಹಿಂದೂ ಸಂಪ್ರದಾಯದ ಇಂಡೋನೇಷಿಯಾದ ಬುಡಕಟ್ಟು ಸಮಾಜದಲ್ಲಿ ಮಕ್ಕಳಿಲ್ಲದವರಿಗೆ ಯಾವುದೇ ಉನ್ನತ ಸ್ಥಾನವಿಲ್ಲ. ಮನುಧರ್ಮ ಶಾಸ್ತ್ರದಲ್ಲಿ ಸ್ವತಃ ಮಗ ತನ್ನ ಹಿಂದಿನ ಮತ್ತು ಮುಂದಿನ ಇಪ್ಪತ್ತು ಮಂದಿಯನ್ನು ಉದ್ಧಾರ ಮಾಡುವನೆಂಬ ಉಲ್ಲೇಖವಿದೆ. ಭಾರತೀಯ ಹಿಂದೂ ಸಂಪ್ರದಾಯಸ್ಥರು ಗೌರವಿಸುವ ಈ ಧರ್ಮ ಗ್ರಂಥದ ಪ್ರಕಾರ ಸಂತಾನಕ್ಕಾಗಿ ನಡೆಯುವ 'ನೆಂಟಕೂಟ'ವು (Incest) ಸಹ ದೋಷವಲ್ಲ.

ಮಹಾಭಾರತದಲ್ಲಿನ ಕುಂತಿಯು 'ನಿಯೋಗ' ಪದ್ಧತಿಯಿಂದ ಮಕ್ಕಳನ್ನು ಪಡೆದಿದ್ದಾಳೆ. ಹತ್ತು ಮಕ್ಕಳ ತಾಯಿಯಾಗು ಎಂದು ಆಶೀರ್ವದಿಸುವ ವಾಡಿಕೆ ನಮ್ಮಲ್ಲಿದೆ. ಡಾ|| ಎಸ್. ಎಲ್. ಭೈರಪ್ಪನವರ 'ವಂಶವೃಕ್ಷ'ವು ಸಂತಾನದ ಕಾಳಜಿಯಲ್ಲಿರುವ ಹಿಂದೂ ಸಮಾಜದ ನೈಜ ಚಿತ್ರಣವಾಗಿದೆ. ಸಂತಾನದ ನಿಯಂತ್ರಣ "ಘೋರ ಪಾಪ" ಎಂಬ ನಂಬಿಕೆ ಕ್ರಿಶ್ಚಿಯನ್ ಹಾಗೂ ಮಹಮ್ಮದೀಯರಲ್ಲಿದೆ. ಹಾಗೆಯೇ ಫಲವಂತತೆ ಮನೋಜೈವಿಕ ಕ್ರಿಯೆಯಷ್ಟೇ ಆಗಿರದೆ, ನೈಸರ್ಗಿಕ ಹಾಗೂ ಸಾಮಾಜಿಕ ನಿಯಂತ್ರಣಾಕಾಂಕ್ಷೆಯ ಅಭಿವ್ಯಕ್ತಿಯೂ ಆಗಿದೆ ಎಂಬುದು ನಾವು ಗಮನಿಸಬೇಕಾದ ಅಂಶ.

**ಈಗ ಬಂಜೆತನದ ವಿಚಾರ :**

ಸಂತಾನೋತ್ಪತ್ತಿಯ ಅಸಾಮರ್ಥ್ಯವನ್ನು ಬಂಜೆತನ ಎಂದು ಕರೆಯುತ್ತಾರೆ. ಯಾವ ಗರ್ಭನಿರೋಧಕ ತಂತ್ರವನ್ನೂ ಉಪಯೋಗಿಸದೆ ಒಂದು ವರ್ಷ ಸತತ ಲೈಂಗಿಕ ಸಂಪರ್ಕವನ್ನು ಹೊಂದಿಯೂ ದಂಪತಿಗಳಿಗೆ ಮಕ್ಕಳಾಗದೇ ಹೋದಲ್ಲಿ ಅವರಲ್ಲಿ ಬಂಜೆತನವಿದೆ ಎಂಬುದು ವಿಜ್ಞಾನಿಗಳ ವ್ಯಾಖ್ಯಾನ. ಬಂಜೆತನ ಕರ್ಮದ ಕಾರಣದಿಂದಾಗಲೀ ಅಥವಾ ಬರಿಯ ಹೆಣ್ಣಿನ ನ್ಯೂನತೆಯಿಂದ ಮಾತ್ರವಾಗಲೀ ಉಂಟಾಗುವ ಸ್ಥಿತಿಯಲ್ಲ. ಇದು ಗಂಡು ಹಾಗೂ ಹೆಣ್ಣು ಇಬ್ಬರೂ ಕಾರಣರಾಗಬಲ್ಲ ಮನೋದೈಹಿಕ ಊನತೆ.

• ಗಂಡಸಿನ ಲೈಂಗಿಕ ಮನೋಪ್ರವೃತ್ತಿ ಬಂಜೆತನಕ್ಕೆ ಕಾರಣವಾಗಬಹುದು. ಇದರಲ್ಲಿ "ಶೀಘ್ರಸ್ಖಲನ" ಹಾಗೂ ಸ್ಖಲನ ಅಸಾಮರ್ಥ್ಯ ಮುಖ್ಯವಾದವು. ಇಲ್ಲಿ ವೀರ್ಯಾಣುಗಳು ಹೆಂಗಸಿನ ಅಂಡವನ್ನು ತಲುಪದೆ ಬಂಜೆತನ ಪ್ರಾಪ್ತವಾಗುತ್ತದೆ.

ಹೆಂಗಸಿನ ಮನೋಪ್ರವೃತ್ತಿಯಾದ "ಯೋನಿಸೆಳವು" (Vaginismuss

(3ನೇ ಪುಟಕ್ಕೆ)

## ಓದುಗರ ಪತ್ರ

# ಪ್ರಗತಿ ಪಥ !?

ಮಾನ್ಯರೆ,

"ರಾಷ್ಟ್ರವು ಪ್ರಗತಿ ಪಥದಲ್ಲಿದೆ" ಈ ವಾಕ್ಯ ಬಹಳಷ್ಟು ಕಡೆ ಕಂಡುಬರುತ್ತದೆ. ಆದರೆ ನಿಜಕ್ಕೂ ಇದು ಆ ದಾರಿಯಲ್ಲಿಲ್ಲ; "ರಾಷ್ಟ್ರವು ಲಂಚದ ಪಥ"ದಲ್ಲಿದೆ ಎಂದು ಬರೆಸಬಹುದು.

ಉದಾ: ಮೇಗೂರು–ಕೊಪ್ಪ–ತೀರ್ಥಹಳ್ಳಿ ಈ ಮಾರ್ಗದಲ್ಲಿ ಒಂದು ಪ್ರತಿಷ್ಠಿತ ಸಾರಿಗೆ ಸಂಸ್ಥೆಯ ಅತೀ ಖಂಡಂ ಬಸ್ಸು ಎಂವೈಸಿ 4174 ಸಂಚರಿಸುತ್ತಿದೆ. ಈ ಬಸ್ಸಿನಲ್ಲಿ ಪ್ರಯಾಣಿಸುವವರ 'ಅದೃಷ್ಟ' ಅತೀ ಚೆನ್ನಾಗಿದೆ. ಏಕೆಂದರೆ ಈ ಬಸ್ಸಿನ ಕೆಳಗಿನ ಪ್ಲಾಟ್‌ಫಾರಂಗೂ ಮೇಲಿನ ಟಾಪ್‌ಗೂ ಆಧಾರ ಸ್ತಂಭಗಳಾಗಿರುವ 20 ಕಂಬಗಳಲ್ಲಿ ಎಲ್ಲವನ್ನೂ ವೆಲ್ಡ್ ಮಾಡಿ ಮತ್ತೆ ತುಂಡಾಗಿದ್ದರೂ ಮೇಲಿನ ಟಾಪ್ ಕೆಳಗೆ ಬೀಳದೇ ಇರುವುದೊಂದು ಸೋಜಿಗವೇ. ಹೆಚ್ಚಿನ ಸರಕನ್ನು ಟಾಪ್ ಮೇಲೆ ಹಾಕಿದರೆ ಅದು ಮುರಿದು ಕೆಳಗೆ ಬೀಳುವುದರಲ್ಲಿ ಸಂದೇಹವಿಲ್ಲ. ಒಳಗಿನ ಆಸನ ವ್ಯವಸ್ಥೆ ದೇವರಿಗೇ ಪ್ರೀತಿ! ಆದರೂ ಯಾವುದೇ ಸಂಬಂಧಪಟ್ಟ ಅಧಿಕಾರಿಗಳು ಕ್ರಮ ಕೈಗೊಂಡಿಲ್ಲ. ಕಾರಣವೇನಿರಬಹುದು? ತಪಾಸಣೆಯಲ್ಲಿ ನಿರ್ಲಕ್ಷ್ಯವೋ ಅಥವಾ 'ಹೊಂದಾಣಿಕೆ'ಯೋ?

(ಈ ಬಗ್ಗೆ ನಾವು ಜಿಲ್ಲಾಧಿಕಾರಿಗಳ ಗಮನ ಸೆಳೆದು ಪತ್ರ ಬರೆದುದಕ್ಕೆ, ಈ ವಿಚಾರದಲ್ಲಿ ಪರಿಶೀಲನೆ ಮತ್ತು ಸೂಕ್ತ ಕ್ರಮಕ್ಕಾಗಿ ಸಂಬಂಧಪಟ್ಟ ಅಧಿಕಾರಿಗಳಿಗೆ ಆದೇಶಿಸಿರುವುದಾಗಿ ಉತ್ತರಿಸಿದ್ದಾರೆ.

—ಸಂ.)

ಇನ್ನೊಂದು ಪ್ರಕರಣ ವಿದ್ಯಾ ಇಲಾಖೆಯದು. ಮುಂದಿನ ವರ್ಷಗಳಲ್ಲಿ ಮಾದರಿ ವಿದ್ಯಾಭ್ಯಾಸ ಅಳವಡಿಸಲು ತರಬೇತಿಗಾಗಿ ಪ್ರೌಢಶಾಲೆಗಳಿಂದ ಇಬ್ಬಿಬ್ಬರು ಅಧ್ಯಾಪಕರನ್ನು 17–6–86ರಿಂದ 10 ದಿನ ಚಿಕ್ಕಮಗಳೂರಿಗೆ ಕಳಿಸಿದ್ದರು. ಅಲ್ಲಿಗೆ ಹೋಗಿ ಬಂದ ನಂತರ ಆ ಅಧ್ಯಾಪಕರುಗಳು ಮಾದರಿ ಶಿಕ್ಷಣ ಅಳವಡಿಸುವತ್ತ ಸಹಾಯಕರಾಗಬೇಕಿರುತ್ತೆ. ಆದರೆ ಕುದುರೆಗುಂಡಿ ಪ್ರೌಢಶಾಲೆಯಿಂದ ನಿವೃತ್ತ ಮುಖ್ಯೋಪಾಧ್ಯಾಯರನ್ನು ಕಳಿಸಿರುವುದನ್ನು ನೋಡಿದರೆ ಇದರ ಉದ್ದೇಶ ಅರ್ಥವಾಗುವುದಿಲ್ಲ. ಪೆನ್ಶನ್ ಪಡೆಯುವ ವ್ಯಕ್ತಿಗೆ ತರಬೇತಿ ನೀಡಿ ಮನೆಗೆ ತಾನೆ ಕಳಿಸುವುದು !

ಈಗ ಹೇಳಿ–ರಾಷ್ಟ್ರ ಪ್ರಗತಿ ಪಥದಲ್ಲಿರುವುದೋ ಅಥವಾ ಯಾವ ಪಥದಲ್ಲಿರುವುದೆಂದು? ದೇಶದ ಬೊಕ್ಕಸದಿಂದ ಹಣ ಹಾಳಾಗುತ್ತಿರುವುದು ಇಂತಹ ಲಕ್ಷಾಂತರ ಪ್ರಕರಣಗಳಿಂದಲ್ಲವೆ ?

—ಹೊಸ್ಮನೆ ರಮೇಶ್,
ಹಿರೇಕೊಡಿಗೆ,

# ಹಲವು ಪ್ರತಿಭೆಗಳ ತಂಡ
# ಚೇತನ ಯುವತಿ ಮಂಡಳಿಗೆ ಪ್ರಶಸ್ತಿ

ಕೊಪ್ಪ: ಇಲ್ಲಿನ ಬಾಳಗಡಿಯಲ್ಲಿರುವ ಚೇತನ ಯುವತಿ ಮಂಡಳಿ ಈ ವರ್ಷ ಜಿಲ್ಲಾ ಮಟ್ಟದಲ್ಲಿ ಅತ್ಯುತ್ತಮ 'ಯುವತಿ ಮಂಡಳಿ' ಪ್ರಶಸ್ತಿ ಮತ್ತು 500 ರೂ. ನಗದು ಬಹುಮಾನಗಳನ್ನು ಗಳಿಸಿದೆ. 1985–86ನೇ ಸಾಲಿನಲ್ಲಿ ಗ್ರಾಮಾಭಿವೃದ್ಧಿ, ಯುವಜನ ಸೇವಾ ಮತ್ತು ಕ್ರೀಡಾ ಚಟುವಟಿಕೆಗಳು ಹಾಗೂ ಸಾಮಾಜಿಕ ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಅತ್ಯಂತ ಯಶಸ್ವಿಯಾಗಿ ನಡೆಸಿರುವುದಕ್ಕಾಗಿ ಈ ಪ್ರಶಸ್ತಿ ಲಭಿಸಿದೆ.

ಬಾಳಗಡಿಯಲ್ಲಿರುವ ವಿದ್ಯಾ ಮಹಿಳಾ ಸಮಾಜದ ಅಂಗವಾಗಿ 1980ರಲ್ಲಿ ಆರಂಭವಾದ ಈ ಯುವತಿ ಮಂಡಳಿ ಹಾಗೂ ವಿದ್ಯಾ ಮಹಿಳಾ ಸಮಾಜದ ಆಶ್ರಯದಲ್ಲಿ 25 ಜನರಿಗೆ ತಂಡ ತಂಡವಾಗಿ ಹೊಲಿಗೆ

(4ನೇ ಪುಟಕ್ಕೆ)

# ಫಲವಂತತೆ ಮತ್ತು ಬಂಜೆತನ

(2ನೇ ಪುಟದಿಂದ)

ಅಥವಾ ಸಂಭೋಗ ಅಸಹನೆಯು ಬಂಜೆತನಕ್ಕೆ ಕಾರಣವಾಗಬಹುದು.

ಹಿಂದೆ ತಿಳಿಸಿದಂತೆ 'ಫಲವಂತತೆ'ಯ ಆವಶ್ಯಕತೆ ಬಗ್ಗೆ ಇದ್ದ 'ಮನೋಜೈವಿಕ ಹಾಗೂ ಸಾಮಾಜಿಕ' ಮನೋಪ್ರವೃತ್ತಿಯಿಂದಾಗಿ ಬಂಜೆತನ ಕೆಲವರಲ್ಲಿ ಮಾನಸಿಕ ಅಸಮತೋಲನವನ್ನು ಉಂಟು ಮಾಡುತ್ತದೆ. ಬಂಜೆತನದಿಂದಾಗಿ ಕೆಲವು ದಂಪತಿಗಳು ಕೀಳರಿಮೆಯಿಂದ (Inferiority com-plez) ನರಳುತ್ತಾರೆ. ಪ್ರಾಪ್ತ ವಯಸ್ಸಿನಲ್ಲಿ ಮಕ್ಕಳನ್ನು ಪಡೆಯುವುದು ತಮ್ಮ ಗಂಡುತನ ಅಥವಾ ಹೆಣ್ಣುತನಕ್ಕೆ ಸವಾಲೆಂದು ಭಾವಿಸುತ್ತಾರೆ. ಮಕ್ಕಳಿಲ್ಲದ ಹಿರಿಯರು ಒಂದು ರೀತಿಯ ಖಾಲಿತನ, ಒಂಟಿತನ ಹಾಗೂ ದುಗುಡಕ್ಕೆ ಒಳಗಾಗುತ್ತಾರೆ. ತಮಗೆ ಮರಣೋತ್ತರ ಸಂಸ್ಕಾರ ಸಿಗುವುದಿಲ್ಲವೆಂದು ಕೊರಗುವುದು, ಉದ್ವೇಗಗೊಳ್ಳುವುದು ಅವೈಜ್ಞಾನಿಕ ಚಿಂತನೆಯಿಂದಾಗಿ ಬರುವ ಸ್ಥಿತಿಗಳು.

ಮಕ್ಕಳಿಲ್ಲದ ಕೆಲವು ಹೆಂಗಸರಿಗೆ 'ಹುಸಿ ಬಸಿರು' ಎಂಬ ಮಾನಸಿಕ ಖಾಯಿಲೆ ಬರುತ್ತದೆ. ಇವರಿಗೆ ಹೊಟ್ಟೆ ಉಬ್ಬರಿಸಿಕೊಳ್ಳುವುದು, ಮುಟ್ಟು ನಿಲ್ಲುವುದು, ಹೊಟ್ಟೆಯಲ್ಲಿ ಮಗು ಓಡಾಡಿದಂತೆ ಭಾಸವಾಗುವುದು ಇತ್ಯಾದಿ ಲಕ್ಷಣಗಳು ಕಾಣಬರುತ್ತವೆ. ಇವು ಬಂಜೆತನದ ಅನಿವಾರ್ಯತೆಗೆ ಮನಸ್ಸು ಕೊಡುವ 'ಹುಸಿ ಸಮಾಧಾನ'. ಇನ್ನು ಕೆಲವರು ಮಗು ಅತ್ತಂತೆ, ಕರೆದಂತೆ ಭ್ರಮಿಸುವುದುಂಟು.

ಆದರೆ ಇದು ಇಂದು ನಾಶಿ ಮಾಡಲಾಗದ ವ್ಯಾಧಿಯಾಗಲೀ, ಮಾಸಿ ಹೋಗಲಾರದ ವೇದನೆಯಾಗಿ ಆಗಲಿ ಉಳಿದಿಲ್ಲ ಇದಕ್ಕೆ ಪರಿಹಾರ ಮಾರ್ಗಗಳು ಹಲವಿವೆ. ಬಂಜೆತನದ ನಿವಾರಣೆಗೆ ಹೆರಿಗೆ ವೈದ್ಯರನ್ನು ಹಾಗೂ ಮಾನಸಿಕ ತಜ್ಞರನ್ನು ಕಾಣುವುದು ಸೂಕ್ತ. ಬಂಜೆತನಕ್ಕೆ ಕಾರಣವಾಗಿರುವ ಮನೋಲೈಂಗಿಕ ಖಾಯಿಲೆಗೆ ಈಗ ವಿಶೇಷವಾದ ಮಾನಸಿಕ ಚಿಕಿತ್ಸೆಯಿದೆ. ಎಲ್ಲ ಪ್ರಯತ್ನಗಳ ನಂತರವೂ ಬಂಜೆತನ ಅನಿವಾರ್ಯವಾದಲ್ಲಿ ಮಾನಸಿಕ ಸಮತೋಲನವನ್ನು ಕಳೆದುಕೊಳ್ಳಬಾರದು. ಇಚ್ಛೆಯಿದ್ದರೆ ಇದಕ್ಕೆ ಪರಿಹಾರವಾಗಿ ದತ್ತು ಸ್ವೀಕಾರ ಮಾಡಬಹುದು. ಇಲ್ಲದಿದ್ದಲ್ಲಿ ವಿಶಾಲ ಮನೋಭಾವವನ್ನು ಬೆಳೆಸಿಕೊಂಡು ಇತರೆ ಎಲ್ಲಾ ಮಕ್ಕಳನ್ನು ಪ್ರೀತಿಯಿಂದ ನೋಡುವ, ಬೆಳೆಸುವ ಸಾಮಾಜಿಕ ಜವಾಬ್ದಾರಿಯನ್ನು ಅಂಗೀಕರಿಸುವುದು ಆರೋಗ್ಯಕರ.

**ಈಗ ಫಲವಂತತೆಯ ಸಮಸ್ಯೆಗಳ ಮನೋಪ್ರವೃತ್ತಿ :**

ಫಲವಂತತೆ ಹೆಚ್ಚುತ್ತಾ ಹೋದ ಹಾಗೆ ಜನಸಂಖ್ಯೆ ಹೆಚ್ಚುತ್ತದೆ. 1975ರ ಅಂಕಿ ಅಂಶದ ಪ್ರಕಾರ ಪ್ರಪಂಚದ ಜನಸಂಖ್ಯೆ 400 ಕೋಟಿ ಆಗಿದೆ. ಜನಸಂಖ್ಯೆಯಲ್ಲಿ ಭಾರತಕ್ಕೆ ಎರಡನೇ ಸ್ಥಾನವಿದೆ. ಸಾರ್ವತ್ರಿಕವಾದ ಮದುವೆಯ ಆಚರಣೆ, ಚಿಕ್ಕ ವಯಸ್ಸಿನಲ್ಲಾಗುವ ಮದುವೆ, ಅನಕ್ಷರತೆ, ಬಡತನ, ಹಾಗೂ ಗರ್ಭನಿರೋಧಕ್ಕೆ ಇರುವ ಪ್ರತಿರೋಧ ಮತ್ತು ಧಾರ್ಮಿಕತೆಯಿಂದಾಗಿ ಭಾರತದಲ್ಲಿ ಫಲವಂತತೆಯ ದರ (Fertility Rate) ಏರಿದೆ. ಫಲವಂತತೆಯ ಸಮಸ್ಯೆಗಳು ಮುಖ್ಯವಾಗಿ ಎರಡು.

ಜನಸಂದಣಿ ಹೆಚ್ಚುವ ದರದಲ್ಲಿ ಸಮಾಜದಲ್ಲಿನ ಆಹಾರ ಉತ್ಪಾದನೆ, ವಸತಿ ಸೌಕರ್ಯ, ನಿರ್ದಿಷ್ಟ ಅವಧಿಯ ಕೆಲಸ ಹಾಗೂ ಸಾಮಾಜಿಕ ಸ್ಥಿರತೆ ಉತ್ತಮ ಹೊಂದದೇ ಹೋದಲ್ಲಿ ಮನುಷ್ಯ ಈ ಬದಲಾವಣೆಗೆ ಹೊಂದಿಕೊಳ್ಳದೇ ಹೋಗುತ್ತಾನೆ. ಅವನಿಗೆ ಇನ್ನೊಬ್ಬ ತನ್ನ ಕ್ಷೇತ್ರವನ್ನು ಅತಿಕ್ರಮಿಸಬಹುದೆಂಬ ಭೀತಿ ಮೂಡುತ್ತದೆ. ಇದರಿಂದಾಗಿ ಅವನಲ್ಲಿ ಆಕ್ರಮಣಶೀಲತೆ (Agression) ಹೆಚ್ಚುತ್ತಾ ಹೋಗುತ್ತದೆ. ಪ್ರಾಣಿಶಾಸ್ತ್ರಜ್ಞನಾದ ಲೇಹಾಸನ್ ಪ್ರಕಾರ ಜನಸಂದಣಿ ಮನುಷ್ಯನ ಆಕ್ರಮಣಶೀಲತೆಯನ್ನು, ಉದ್ವೇಗವನ್ನು ಹೆಚ್ಚಿಸುತ್ತದೆ.

ಈ ಮೂಲಕವಾಗಿ, ವಿಕಾಸ ಹೊಂದಿದ ಮಾನವನ ಆಕ್ರಮಣಶೀಲ ಮನೋಪ್ರವೃತ್ತಿಯನ್ನು ಗುರುತಿಸಬಹುದು. ಯುದ್ಧ, ದೊಂಬಿ, ಜಗಳಾಟ, ದಂಗೆ ಇವು ನಾವು ನಿತ್ಯ ಪ್ರದರ್ಶಿಸುವ 'ಆಕ್ರಮಣಶೀಲ ಮನೋಭಾವ'. ಜನಸಂದಣಿ ಮನುಷ್ಯನ ಏಕಾಂಗಿತನಕ್ಕೆ ಧಕ್ಕೆ ಉಂಟು ಮಾಡುತ್ತದೆ. ಒಂದು ಸೀಮಿತ ಪ್ರಮಾಣದಲ್ಲಿ ಏಕಾಂಗಿತನವೂ ಸಹ ಮನುಷ್ಯನ ಮಾನಸಿಕ ಸಮತೋಲನಕ್ಕೆ ಅತ್ಯಾವಶ್ಯಕ.

ಇನ್ನು, ನಗರೀಕರಣ ಹೊಂದುತ್ತಿರುವ ಈ ಸಮಾಜದಲ್ಲಿ ಮಕ್ಕಳನ್ನು ಬೆಳೆಸುವುದು, ಅವರಿಗೆ ಸಾಮಾಜಿಕ ಸ್ಥಿರತೆಯನ್ನು ತಂದುಕೊಡುವುದು, ವೈಯುಕ್ತಿಕವಾಗಿ ದುಬಾರಿಯ ಜವಾಬ್ದಾರಿಯಾಗಿದೆ. ಹೀಗೆಯೇ ಲೈಂಗಿಕ ಕ್ರಿಯೆ ಮನುಷ್ಯನಿಗೆ ಅತ್ಯಾವಶ್ಯಕವಾದ ಕ್ರಿಯೆ. ನಮ್ಮಲ್ಲಿರುವ "ಫಲವಂತತೆ" ಮದುವೆ ಆಗದೇ ಇದ್ದವರಲ್ಲಿ ಈ ಕ್ರಿಯೆಯನ್ನು ಮೊಟಕುಗೊಳಿಸಿದೆ. ಇದು ಲೈಂಗಿಕ ಕ್ರಿಯೆಯ ಬಗ್ಗೆ ಭೀತಿಯನ್ನು ಹಬ್ಬಿಸಿದೆ. ಅಲ್ಲದೆ ಅನೈಸರ್ಗಿಕ ಲೈಂಗಿಕ ಕ್ರಿಯೆ ಹೆಚ್ಚಾಗಲು ಒಂದು ಕಾರಣವಾಗಿದೆ. ಅನಿವಾರ್ಯವಾಗಿ ನಡೆದ ಲೈಂಗಿಕ ಕ್ರಿಯೆಯಿಂದ ಹುಟ್ಟಿದಂತಹ ಜಾರ ಗರ್ಭದ (illegitimate) ಮಕ್ಕಳು ವೈಯುಕ್ತಿಕ ಹಾಗೂ ಸಾಮಾಜಿಕ ಸಮಸ್ಯೆಗೆ ಎಡೆ ಮಾಡಿಕೊಟ್ಟಿವೆ.

**ಈಗ ಸಂತಾನ ನಿಯಂತ್ರಣದ ಸಮಸ್ಯೆ:**

ಧಾರ್ಮಿಕ–ಸಾಮಾಜಿಕ ಕಾರಣಗಳಿಂದಾಗಿ ಜನರಲ್ಲಿ ಜನನ ನಿಯಂತ್ರಣ, ಪಾಪಪ್ರಜ್ಞೆಯನ್ನುಂಟುಮಾಡುವ ಕ್ರಿಯೆಯಾಗಿದೆ. ಜನನ ನಿಯಂತ್ರಣದ ಬಗ್ಗೆ ಸಾಮೂಹಿಕವಾಗಿ ಒಂದಾದ ಅಭಿಪ್ರಾಯವಿಲ್ಲ.

ವಿವಿಧ ಕೋಮಿನಲ್ಲಿ ಜನನ ನಿಯಂತ್ರಣದ ಬಗ್ಗೆ ಏರುಪೇರಿನ ಹತೋಟಿಯಿದ್ದು, ಕೋಮು ಸೌಹಾರ್ದತೆಗೆ ಧಕ್ಕೆ ಬಂದಿದೆ. ಹಿಂದೆ ಹೇಳಿದಂತೆ ಒಂದು ಕೋಮು ಪ್ರಬಲವಾಗಿ ಬೆಳೆದು ತನ್ನ ಕ್ಷೇತ್ರವನ್ನು ಅತಿಕ್ರಮಿಸಬಹುದೆಂಬ ಭಯ, ಅಸ್ಥಿರತೆ, ಅಸೂಯೆಯನ್ನು ಇನ್ನೊಂದು ಕೋಮಿನಲ್ಲಿ ಮೂಡಿಸಿದೆ. ಇದರಿಂದ ಸಂತಾನ ನಿಯಂತ್ರಣಕ್ಕೆ ಪ್ರತಿರೋಧದ ಮನೋಪ್ರವೃತ್ತಿ ಸ್ಪರ್ಧಾತ್ಮಕವಾಗಿ ಬೆಳೆಯುತ್ತಿದೆ.

**ಸಂತಾನ ನಿಯಂತ್ರಣ ನಮಗೆ ಅವಶ್ಯಕವಾದುದು ಎಂಬುದು ನನ್ನ ಭಾವನೆ.** ಇದರ ಬಗ್ಗೆ ಸಾಮೂಹಿಕವಾದ ಗಂಭೀರ ಚಿಂತನೆ ಹಾಗೂ ಶಿಕ್ಷಣ ಅತ್ಯಗತ್ಯ. ಸಂತಾನ ಹರಣ ಶಸ್ತ್ರ ಚಿಕಿತ್ಸೆ ಒತ್ತಾಯಕ್ಕೆ ಮಾಡಿಸುವ ಮಾಘಸ್ನಾನವಲ್ಲ. ಪ್ರತಿಯೊಬ್ಬ ಮನುಷ್ಯನಿಗೂ ಪ್ರತಿಯೊಂದು ಹಂತದಲ್ಲಿ ಅದನ್ನು ಅರ್ಥೈಸುವುದು ಮುಖ್ಯ. ಶಸ್ತ್ರ ಚಿಕಿತ್ಸೆಗೆ ಒಳಗಾಗುವ ಪ್ರತಿಯೊಬ್ಬ ವ್ಯಕ್ತಿಗೂ ಲೈಂಗಿಕ ಭಾಗಗಳ ರಚನೆ ಮತ್ತು ಲೈಂಗಿಕ ಮನೋಜೈವಿಕ ಕ್ರಿಯೆಗಳ ಬಗ್ಗೆ ಶಿಕ್ಷಣ ನೀಡಬೇಕು. ನಂತರ ಶಸ್ತ್ರ ಚಿಕಿತ್ಸೆಯ ವಿಧಾನವನ್ನು ಸೂಕ್ಷ್ಮವಾಗಿ ವಿವರಿಸಬೇಕು. ಇದರಿಂದ ಅವರಲ್ಲಿ ಉಂಟಾಗುವ ಮನೋವೈಪರೀತ್ಯಗಳು ಸಂಪೂರ್ಣವಾಗಿ ಕಡಿಮೆಯಾಗುತ್ತವೆ. ಶಿಬಿರವನ್ನು ನಡೆಸುವಾಗ ಸಾಮೂಹಿಕವಾದ ಶಿಕ್ಷಣದ ಮೂಲಕ ಜನರನ್ನು ತರಬೇತಿಗೊಳಿಸುವುದು ಸಾಧ್ಯ.

'ಆಕ್ರಮಣಶೀಲತೆ'ಯನ್ನು ಮಾನವೀಯ ಮೌಲ್ಯಗಳುಳ್ಳ ವ್ಯಕ್ತಿ – ವ್ಯಕ್ತಿ ಸಂಬಂಧವನ್ನು ಹೆಚ್ಚಿಸುವ ಸಮಾಜ ವ್ಯವಸ್ಥೆಯಿಂದ ತಡೆಗಟ್ಟಬಹುದು.

ಡಾ|| ಯು. ಅರುಣಾಚಲ,
ಮನೋರೋಗ ತಜ್ಞರು;
ಮಾನಸಾ ನರ್ಸಿಂಗ್ ಹೋಂ,
ತೀರ್ಥಹಳ್ಳಿ.

ಸೌಜನ್ಯ : ತೀರ್ಥಹಳ್ಳಿ ಗ್ರಾಮಭಾರತ.

## ವ್ಯ.ಸೇ.ಸ. ಸಂಘ ಕಾರ್ಯದರ್ಶಿ ಇಬ್ಬಗೆ ಅಧಿಕಾರ ಚಲಾವಣೆ ಸೂತ್ರಕ್ಕೆ ವಿರೋಧ

ಕೊಪ್ಪ: ಚಿಕ್ಕಮಗಳೂರು ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕಿನ ಅಧ್ಯಕ್ಷರಾದ ಕೆ. ಎಂ. ಶ್ರೀನಿವಾಸರ ಅಧ್ಯಕ್ಷತೆಯಲ್ಲಿ, ಕೊಪ್ಪ, ಶೃಂಗೇರಿ, ನರಸಿಂಹರಾಜಪುರ ತಾಲ್ಲೂಕುಗಳ ವ್ಯವಸಾಯ ಸೇವಾ ಸಹಕಾರ ಸಂಘಗಳ ಅಧ್ಯಕ್ಷರ ಮತ್ತು ಕಾರ್ಯದರ್ಶಿಗಳ ಸಭೆಯು ಜು. 14ರಂದು ಬಾಳಗಡಿ ಆಫೀಸರ್ಸ್ ಕ್ಲಬ್ ಕಟ್ಟಡದಲ್ಲಿ ನಡೆಯಿತು. ಬ್ಯಾಂಕಿನ ಸಾಲ ವಸೂಲಿ ವಿಚಾರ ವಿಮರ್ಶಿಸಲಾಯ್ತು. ಜಿಲ್ಲಾಪತ್ರಿನ ಸಹಕಾರ ಸಂಘಗಳ ಕಾಮನ್ ಕೇಡರ್ ಸಮಿತಿಯ ನಿಯಮಾವಳಿಗಳು ಮತ್ತು ಅವುಗಳ ಪಾಲನೆ ಬಗ್ಗೆ ಚರ್ಚಿಸಿ, ವ್ಯವಸಾಯ ಸೇವಾ ಸಹಕಾರ ಸಂಘಗಳ ಅಭಿವೃದ್ಧಿಗೆ ಮತ್ತು ಆಡಳಿತ ಮಂಡಳಿಯ ಹಕ್ಕಿಗೆ ಧಕ್ಕೆ ಉಂಟಾಗುವುದಾಗಿ ಸಭೆ ನಿರ್ಧರಿಸಿ, ಇಬ್ಬಗೆಯ ಅಧಿಕಾರ ಚಲಾವಣೆ ಸೂತ್ರವನ್ನು ಜಾರಿಗೊಳಿಸದೇ ವಾಪಸ್ ಪಡೆಯಬೇಕೆಂದು ಅಧ್ಯಕ್ಷರನ್ನು ಕೇಳಿಕೊಳ್ಳಲಾಯ್ತು.

## ಅಂತಃಕರಣಕ್ಕೆ ಆಳೇನು-ಧಣಿಯೇನು?

ಕೊಪ್ಪ: ನಿರ್ಗತಿಕ ಕೃಷಿ ಕಾರ್ಮಿಕ. ಅಂಗವಿಕಲ ಬೇರೆ. ಮನೆಯಲ್ಲಿ ಹೆಂಡತಿ 1 ತಿಂಗಳ ಹಸಿ ಬಾಣಂತಿ. ಇಂಥವರಿಗೆ ನಡು ಮಳೆಗಾಲದಲ್ಲಿ ಮನೆ ಸುಟ್ಟುಹೋದರೆ ಏನು ಗತಿಯಾಗಬೇಕು?

ಸುತ್ತಮುತ್ತಲವರು ಅಂತಃಕರಣವುಳ್ಳ ಮನುಷ್ಯರಾದರೆ ಮಾತ್ರ ಆತನ ಕುಟುಂಬ ನೀರು ಪಾಲಾಗದೆ ಸುರಕ್ಷಿತವಾಗಿರಬಹುದೆಂಬುದಕ್ಕೆ ಒಳ್ಳೆಯ ಉದಾಹರಣೆಯೊಂದು ಈ ತಾಲ್ಲೂಕಿನ ನಿಲುವಾಗಿಲು ಸಮೀಪದ ನಂದಿಗೋಡಿನಲ್ಲಿ ಈಚೆಗೆ ನಡೆಯಿತು.

ಜು. 8 ರಂದು ಇಲ್ಲಿನ ಅಣ್ಣಪ್ಪ ಎಂಬ ಅಂಗ ವಿಕಲ ಕೃಷಿ ಕಾರ್ಮಿಕ ಕೆಲಸಕ್ಕೆ ಹೋಗಿದ್ದು, ಹಸಿ ಬಾಣಂತಿ ಬಟ್ಟೆ ಒಗೆದುಕೊಂಡು ಬರಲು ಸುದೂರದ ರಸ್ತೆ ಬದಿಯ ಬೋರ್‌ವೆಲ್ ಬಳಿಗೆ ಹೋಗಿದ್ದಾಗ ಮನೆಯ ಹಿಂಭಾಗ ಕೊಟ್ಟಿಗೆಯಲ್ಲಿ ಒಣಗಹಾಕಿದ್ದ ಕಂಬಳಿಗೆ ಬೆಂಕಿ ತಗುಲಿ, ಅಲ್ಲಿಂದ ಕೊಟ್ಟಿಗೆಗೆ ಹೊತ್ತಿಕೊಂಡು ಮನೆ ಉರಿಯ ತೊಡಗಿತು. ಬಾಣಂತಿ ಬಂದು ಬೊಬ್ಬೆ ಹೊಡೆದಾಗ ಹತ್ತಿರವಿದ್ದ ಯುವಕರು ಮನೆಯೊಳಗೆ ನುಗ್ಗಿ ಹಸುಗೂಸನ್ನು ತೊಟ್ಟಿಲಿನಿಂದ ಎತ್ತಿ ಹೊರತಂದರು. ಆಗಲೇ ತೊಟ್ಟಿಲ ಗಳ ಸಹ ಉರಿಯುತ್ತಿದ್ದು ಮಗುವಿನ ಕೈಗೆ ಕೂಡ ಸುಟ್ಟ ಗಾಯವಾಗಿತ್ತು. ಆದರೆ ಹೆಚ್ಚಿನ ಅಪಾಯವಾಗಲಿಲ್ಲ.

ಮನೆಯ ಗೋಡೆಗಳ ಹೊರತು ಮತ್ತೆಲ್ಲ ಭಸ್ಮವಾಯಿತು. 3 ಡಬ್ಬಿ ಅಕ್ಕಿ, 1 ವಾರದ ಹಿಂದಷ್ಟೇ ಪಡೆದಿದ್ದ ಹೆರಿಗೆ ಭತ್ಯದ ಹಣ, ಇದ್ದ ಅಲ್ಪ ಸ್ವಲ್ಪ ಬಂಗಾರ ಎಲ್ಲವೂ ನಾಶವಾಯಿತು. ಒಟ್ಟು ನಷ್ಟ ಸುಮಾರು 8–9 ಸಾವಿರ ರೂ. ಎಂದು ಅಂದಾಜು.

ಆದರೆ ನೆರೆಹೊರೆಯವರು ಈ ಕುಟುಂಬದ ನೆರವಿಗೆ ಧಾವಿಸಿ ಬಂದರು. 2 ದಿನದಲ್ಲಿ ಪುನಃ ಮನೆ ಸಿದ್ಧಗೊಳಿಸಿದರು (ತಾತ್ಕಾಲಿಕ ಇರಬಹುದು.) ಹಾಗೆಯೇ ಊರವರೇ ಮುಂದೆ ನಿಂತು ತಹಸೀಲ್ದಾರರಿಂದ 300 ರೂ. ಪರಿಹಾರವನ್ನೂ ಮಂಜೂರು ಮಾಡಿಸಿದರು. ಕ್ಷೇತ್ರಾಭಿವೃದ್ಧಿ ಅಧಿಕಾರಿಗಳಿಂದ ಜನತಾ ಮನೆಯನ್ನೂ ಮಂಜೂರು ಮಾಡಿಸಿಕೊಟ್ಟಿದ್ದಾರಂತೆ.

ಕಷ್ಟದಲ್ಲಿ ಅಂತಃಕರಣ ತೋರಿಸಲು ಆಳೇನು–ಧಣಿಯೇನು? ಅಲ್ಲವೆ?

## ಸಮುದಾಯ ಆರೋಗ್ಯ ಮಾರ್ಗದರ್ಶಿಗಳ ವಜಾ: ಪ್ರತಿಭಟನೆ

ಕೊಪ್ಪ: 1983ರಿಂದ ಮಾಸಿಕ 50 ರೂ. ಗೌರವಧನದಲ್ಲಿ ಸಮುದಾಯ ಆರೋಗ್ಯ ಮಾರ್ಗದರ್ಶಿಗಳು ಕೆಲಸ ನಿರ್ವಹಿಸುತ್ತಿದ್ದು, ಅವರಲ್ಲಿ ಪುರುಷರನ್ನು ಜುಲೈ 1ರಿಂದ ವಜಾ ಮಾಡಿ ಸರ್ಕಾರ ಆದೇಶ ನೀಡಿರುವುದನ್ನು ಇಲ್ಲಿ ನೂತನವಾಗಿ ರಚಿಸಲಾದ ಸ|| ಆ|| ಮಾರ್ಗದರ್ಶಿಗಳ ಸಂಘ ತೀವ್ರವಾಗಿ ಖಂಡಿಸಿದೆ.

ಇವರಿಂದ ಮಲೆನಾಡಿನಲ್ಲಿ ಹಳ್ಳಿಗಾಡಿನ ಜನರಿಗೆ ಬಹಳ ಪ್ರಯೋಜನವಾಗುತ್ತಿತ್ತು. ಇವರಿಗೆ 1983ರಲ್ಲಿ ಮಾಸಿಕ 200 ರೂ. ಸ್ಟೈಪೆಂಡ್‌ನೊಂದಿಗೆ 3 ತಿಂಗಳ ತರಬೇತಿ ಸಹ ನೀಡಲಾಗಿತ್ತು. ಅವರನ್ನು ಪುನಃ ನೇಮಿಸಿಕೊಳ್ಳಬೇಕೆಂದು ಸಂಘ ಒತ್ತಾಯಿಸಿದ್ದು, ತಪ್ಪಿದಲ್ಲಿ ಚಳುವಳಿ ಹೂಡಲು ನಿರ್ಧರಿಸಿದೆ.

ನೂತನ ಸಂಘದ ಪದಾಧಿಕಾರಿಗಳು: ನಾಗೇಶ್ (ಅಧ್ಯಕ್ಷ), ಲೀಲಾವತಿ, ಸುಮತಿ (ಉಪಾಧ್ಯಕ್ಷರು), ಎಸ್. ಆರ್. ರಾಮಚಂದ್ರ (ಪ್ರ. ಕಾರ್ಯದರ್ಶಿ), ಎಸ್. ಜಿ. ಸುಬ್ರಮಣ್ಯ, ತಮ್ಮಣ್ಣ (ಕಾರ್ಯದರ್ಶಿಗಳು), ಎಲಿಜಾ (ಖಜಾಂಚಿ).

## ಚೇತನ ಯುವತಿ ಮಂಡಳಿಗೆ ಪ್ರಶಸ್ತಿ

(3ನೇ ಪುಟದಿಂದ)

ತರಬೇತಿ ನೀಡಲಾಗುತ್ತಿದೆ. ಇದಲ್ಲದೆ ಟ್ರೈಸಂ ಯೋಜನೆಯಲ್ಲಿ 15 ಜನರಿಗೆ 5 ತಿಂಗಳ ಕಾಲ ಹೊಲಿಗೆ ಕಲಿಸಲಾಗುತ್ತಿದೆ.

ಪ್ರತಿ ವರ್ಷ ವಿವಿಧ ಸಾಂಸ್ಕೃತಿಕ, ಕ್ರೀಡಾ ಚಟುವಟಿಕೆಗಳನ್ನು ನಡೆಸುತ್ತಾ ಹಲವು ಮಂದಿ ಪ್ರತಿಭಾವಂತರನ್ನು ಪ್ರಕಾಶಕ್ಕೆ ತಂದಿರುವ ಈ ಸಂಘ ಜಿಲ್ಲೆ, ವಿಭಾಗ ಹಾಗೂ ರಾಜ್ಯ ಮಟ್ಟಗಳ ಯುವಜನ ಮೇಳಗಳಲ್ಲಿ ಪ್ರತಿ ವರ್ಷವೂ ಬಹುಮಾನಗಳನ್ನು ಗಳಿಸುತ್ತಿದೆ.

ಈ ಎರಡು ಸಂಘಗಳೂ ಒಟ್ಟಿಗೆ ಸ್ವಂತ ಕಟ್ಟಡಗಳನ್ನು ಹೊಂದಿರುವುದು ಮಾತ್ರವಲ್ಲದೆ ಕೆಲವು ಕಟ್ಟಡಗಳನ್ನು ಬಾಡಿಗೆಗೆ ಸಹ ಕೊಟ್ಟು ಸ್ವತಂತ್ರ ಆದಾಯ ಮೂಲವನ್ನು ರೂಢಿಸಿಕೊಂಡಿವೆ. ಆರೋಗ್ಯವಂತ ಮಕ್ಕಳಿಗೆ ಬಹುಮಾನ ಕೊಡುವ ಯೋಜನೆ ಹಮ್ಮಿಕೊಳ್ಳುವುದರ ಮೂಲಕ ಮಕ್ಕಳ ಆರೋಗ್ಯದ ಬಗ್ಗೆ ನಿಗಾ ವಹಿಸುವುದಕ್ಕೆ ಪೋಷಕರಲ್ಲಿ ಅರಿವು ಮೂಡಿಸಲಾಗುತ್ತಿದೆ.

ಸ್ವಂತ ಗ್ರಂಥಾಲಯ ಹೊಂದಿರುವ ಈ ಕೇಂದ್ರದಲ್ಲಿ ಈಗಾಗಲೇ 1307 ಪುಸ್ತಕಗಳಿದ್ದು ಓದುಗರಿಗೆ ಅವಕಾಶ ಕಲ್ಪಿಸಿದೆ.

ಹೀಗೆ ತಮ್ಮದೇ ಆದ ವೈಶಿಷ್ಟ್ಯಗಳನ್ನು ಬೆಳೆಸಿಕೊಂಡು ಮುಂದುವರಿಯುತ್ತಿರುವ ಈ ಸಂಘಗಳು ಅಷ್ಟಕ್ಕೇ ತೃಪ್ತಿಗೊಳ್ಳದೆ ಮುಂದೆ, ಗ್ರಾಮೀಣ ಮಹಿಳೆಯರಿಗೆ ಉದ್ಯೋಗಾವಕಾಶ ಕಲ್ಪಿಸುವ ನಿಟ್ಟಿನಲ್ಲಿ ಯಾವುದಾದರೂ ಉತ್ಪಾದನಾ ಚಟುವಟಿಕೆಯನ್ನು ಹಮ್ಮಿಕೊಂಡು ಬೇರೆ ಸಂಘಗಳಿಗೆ ಮಾದರಿಯಾಗುವತ್ತ ಯೋಚಿಸುವುದೊಳ್ಳೆಯದು.

ಪ್ರಶಸ್ತಿ ಗಳಿಸಿದ ಸಂದರ್ಭದಲ್ಲಿ ಯುವತಿ ಮಂಡಳಿಗೆ 'ಮುಂಜಾವು' ಶುಭಾಶಯಗಳು

## ಸರ್ವ ಸದಸ್ಯರ ಸಭೆ

ಹರಿಹರಪುರ: ಮಲೆನಾಡು ಯಕ್ಷಗಾನ ಕಲಾ ಶಿಕ್ಷಣ ಕೇಂದ್ರದ ಸರ್ವ ಸದಸ್ಯರ ಸಭೆ ಗೌರವಾಧ್ಯಕ್ಷರಾದ ಹರಿಹರಪುರ ಮಠಾಧೀಶರಸನ್ನುಖದಲ್ಲಿ ನಡೆಯಿತು. ಅಧ್ಯಕ್ಷ ಎಂ. ಎಲ್. ರಾಮಚಂದ್ರರಾವ್ ಅಧ್ಯಕ್ಷತೆ ವಹಿಸಿದ್ದರು. ಕಾರ್ಯದರ್ಶಿ ಹೆಚ್. ಎಸ್. ಮಂಜುನಾಥ್ ವರದಿ ಮಂಡಿಸಿದರು. ಡಾ|| ಶೇಷಗಿರಿ ಕರ್ನಾಟಕದ ಹಿರಿಯ ಕಲಾವಿದರು, ಸಾಹಿತಿಗಳು ಮೃತರಾದ ಬಗ್ಗೆ ಸಂತಾಪ ಸೂಚಿಸಿದರು. ಕಲಾ ಕೇಂದ್ರದ ಆಜೀವ ಗೌರವ ಸದಸ್ಯರಾಗಿ ಹಿರಿಯ ಕಲಾವಿದ ಹೆಚ್. ವಿ. ಸೀತಯ್ಯ ಮತ್ತು ಕೃಷ್ಣದೇನರಯ್ಯ ಇವರನ್ನು ಸರ್ವಾನುಮತದಿಂದ ಸೇರಿಸಿಕೊಳ್ಳಲಾಯಿತು. ಸ್ವಾಮೀಜಿ ಆಶೀರ್ವಚನ ನೀಡಿದರು. ಕೆ.ಆರ್. ಭಾಸ್ಕರಾಚಾರ್ ವಂದಿಸಿದರು.

## ಹಾರ್ದಿಕ ಬೀಳ್ಕೊಡಿಗೆ

ಭಂಡಿಗಡಿ: ಸುಮಾರು ಏಳು ವರ್ಷಕ್ಕೂ ಹೆಚ್ಚು ಕಾಲ ಇಲ್ಲಿ ಗ್ರಾಮಲೆಖ್ಖಿಗರಾಗಿ ಸೇವೆ ಸಲ್ಲಿಸುತ್ತಿದ್ದ ಎ. ನರಸಿಂಹಮೂರ್ತಿಯವರಿಗೆ ಶ್ರೀಂಗೇರಿ ತಾಲ್ಲೂಕಿನ ಕಿಗ್ಗಕ್ಕೆ ವರ್ಗಾವಣೆಯಾಗಿದೆ. ಇವರ ಸ್ಥಾನಕ್ಕೆ ವೆಂಕಟಕೃಷ್ಣಯ್ಯ ಎಂಬವರ ನೇಮಕವಾಗಿದ್ದು, ಅಧಿಕಾರ ವಹಿಸಿಕೊಂಡಿದ್ದಾರೆ.

ಜನಾನುರಾಗಿಯಾಗಿ ಬಹುತೇಕ ಜನರ ಮೆಚ್ಚುಗೆಗೆ ಪಾತ್ರರಾದ ಮೂರ್ತಿಯವರಿಗೆ ಜುಲೈ 12ರಂದು ಮಾಜಿ ಗ್ರಾಮಾಧ್ಯಕ್ಷ ಹೆಚ್. ಎಸ್. ಸೀತಾರಾಮಯ್ಯನವರ ಅಧ್ಯಕ್ಷತೆಯಲ್ಲಿ ಹೃತ್ಪೂರ್ವಕ ಬೀಳ್ಕೊಡುಗೆ ಸಮಾರಂಭ ಏರ್ಪಟ್ಟಿತ್ತು. ನಿರೀಕ್ಷೆಗೂ ಮೀರಿ ಜನ ಸೇರಿದ್ದ ಸಮಾರಂಭದಲ್ಲಿ ನೂತನಾಡಿದ ಪತ್ರಿಕಾ ಪ್ರತಿನಿಧಿ ಬಿ. ಎ. ಭಾಸ್ಕರ್, ಕೆ. ಜಿ. ಧರ್ಮಪ್ಪ, ಸಿ. ಜಿ. ಶಂಕರಪ್ಪ ಮತ್ತು ರಾಮಭಟ್ಟರು ಕಾರ್ಯದರ್ಶಿಯವರ ಪ್ರಾಮಾಣಿಕತೆಯ ಬಗ್ಗೆ ತುಂಬುಕಂಠದಿಂದ ಪ್ರಶಂಸಿಸಿದರು.

ಅಧ್ಯಕ್ಷರ ಭಾಷಣದ ನಂತರ ಮೂರ್ತಿಯವರಿಗೆ ನೆನಪಿನ ಕಾಣಿಕೆಯನ್ನು ಅರ್ಪಿಸಲಾಯಿತು. ಹೆಚ್. ಸಿ. ಸಿದ್ದಪ್ಪ ಸ್ವಾಗತಿಸಿ, ವಂದಿಸಿದರು.

(ವರದಿ: ಬಿ. ಎನ್. ಭಾಸ್ಕರ್.)

## ಲಯನ್ಸ್ ಕ್ಲಬ್ ಪದಗ್ರಹಣ

(1ನೇ ಪುಟದಿಂದ)

ನೂತನ ಪದಾಧಿಕಾರಿಗಳ ಪದಗ್ರಹಣ ಸಮಾರಂಭ ಈಚೆಗೆ ನಡೆದು ಉಡುಪಿ ಲಯನ್ಸ್‌ನ ಮಾಜಿ ಅಧ್ಯಕ್ಷರಾದ ಡಾ|| ಎಂ. ಆರ್. ಹೆಗ್ಡೆ ಪ್ರಮಾಣ ವಚನ ಸ್ವೀಕಾರ ವಿಧಿ ನೆರವೇರಿಸಿದರು. ನೂತನ ಸದಸ್ಯರುಗಳಿಗೆ ಭದ್ರಾವತಿ ಲಯನ್ಸ್ ಕ್ಲಬ್‌ನ ಮಾಜಿ ಜಿಲ್ಲಾ ಗವರ್ನರ್‌ರವರಾದ ಪಿ. ಜಿ. ಗುರ್ಜರ್ ಮತ್ತು ಎಂ.ಡಿ. ಬಾಲಕೃಷ್ಣ ಇವರುಗಳು ಸಮಾರಂಭದಲ್ಲಿ ಉಪಸ್ಥಿತರಿದ್ದರು.

1986–87ನೇ ಸಾಲಿಗೆ ಆಯ್ಕೆಯಾದ ಇತರ ಪದಾಧಿಕಾರಿಗಳು: ಶ್ರೀ ಶಶಿಕುಮಾರ್ (ಸಹ ಕಾರ್ಯದರ್ಶಿ), ಪಿ. ಬಿ. ಆದಿತ್ಯ (ಖಜಾಂಚಿ), ಕೆ. ವಿ. ಅಜಿಲ, ಗೋಪಾಲಕೃಷ್ಣ ಶೆಟ್ಟಿ, ಟಿ. ಎ. ಪಿಂಟೋ (ಉಪಾಧ್ಯಕ್ಷರುಗಳು), ಮಂಜುನಾಥಸ್ವಾಮಿ (ಟೇಮರ್), ಜಿ.ಕೆ. ಪಟವರ್ಧನ್ (ಟೈಲ್‌ಟ್ವಿಸ್ಟರ್) ಮತ್ತು 10 ಜನ ಆಡಳಿತ ಮಂಡಳಿ ನಿರ್ದೇಶಕರು.

## ಮಿಟ್ಸುಬಿಷಿ ಮಿನಿ ಟ್ರಾಕ್ಟರ್ ವಿತರಣೆ ಆರಂಭ

ಶಿವಮೊಗ್ಗ: ಅದ್ದೂರಿ ಪ್ರಚಾರದೊಂದಿಗೆ ಬುಕ್ಕಿಂಗ್ ಆರಂಭಿಸಿ, ರೈತಾಪಿ ವಲಯಗಳಲ್ಲಿ ಬಹಳ ನಿರೀಕ್ಷೆ ಮೂಡಿಸಿರುವ ಮಿಟ್ಸುಬಿಷಿ ಮಿನಿ ಟ್ರಾಕ್ಟರುಗಳ ವಿತರಣೆ ಶುರುವಾಗಿದ್ದು, ಈಗಾಗಲೇ ಸುಮಾರು 12 ಟ್ರಾಕ್ಟರುಗಳು ಬಿಡುಗಡೆಯಾಗಿರುವುದಾಗಿ ಇಲ್ಲಿನ ರಾಜಾ ಇಂಡಸ್ಟ್ರಿಯಲ್ ವರ್ಕ್ಸ್‌ನ ಮ್ಯಾನೇಜರ್ ಕೆ. ಎನ್. ಸತ್ಯನಾರಾಯಣ ತಿಳಿಸಿದ್ದಾರೆ.

ಸದ್ಯದಲ್ಲೇ ಪುನಃ ಬುಕ್ಕಿಂಗ್ ಆರಂಭಿಸಲಾಗುವುದೆಂದೂ ಅವರು 'ಮುಂಜಾವು'ಗೆ ತಿಳಿಸಿದ್ದಾರೆ.

## ಪ್ರಕಟಣೆ

ಈ ಮೂಲಕ ಸಂಬಂಧಪಟ್ಟವರಿಗೆಲ್ಲ ತಿಳಿಯಪಡಿಸುವುದೇನೆಂದರೆ: 13.7.1986 ರ "ಮುಂಜಾವು" ವಾರಪತ್ರಿಕೆಯ 2ನೇ ಪುಟದಲ್ಲಿ "ಮನೆ ಮಾರಾಟಕ್ಕಿದೆ" ಎಂಬುದಾಗಿ ಜಾಹೀರಾತು ನೀಡಲ್ಪಟ್ಟಿರುವ ಸೊತ್ತು ಪುರಸಭೆಗೆ ಆಧಾರವಾಗಿರುತ್ತೆ. ಈ ಸ್ವತ್ತಿನ ಮೇಲೆ 8000–00 (ರೂ. ಎಂಟು ಸಾವಿರ ಮಾತ್ರ) ರೂ.ಗಳನ್ನು "ಭಾಗ್ಯ ಮಂದಿರ" ಯೋಜನೆ ಅನ್ವಯ ನೀಡಲಾಗಿದೆ. ಆದ್ದರಿಂದ ಈ ಸ್ವತ್ತನ್ನು ಮಾರಾಟ ಅಥವಾ ಪರಭಾರೆ ಮಾಡುವ ಹಕ್ಕು ಶ್ರೀ ಕೆ.ಎಸ್. ರಾಮಮೂರ್ತಿ ಮತ್ತು ಶ್ರೀ ಕೆ. ಕೆ. ವೆಂಕಪ್ಪಯ್ಯ ಇವರುಗಳಿಗೆ ಇರುವುದಿಲ್ಲ. ತಿಳಿಯುವುದು.

ಕೊಪ್ಪ.
ದಿನಾಂಕ: 15.7.86

(ಸಹಿ) ಆರ್. ಗುಂಡೂರಾವ್,
ಮುಖ್ಯಾಧಿಕಾರಿಗಳು.
ಪುರಸಭೆ, ಕೊಪ್ಪ.

ಸಂಪಾದಕ, ಮುದ್ರಕ ಮತ್ತು ಪ್ರಕಾಶಕ ಸಿರಿಮನೆ ನಾಗರಾಜ್, ಅಚ್ಚು: ದೀವಟಿಗೆ ಅಚ್ಚುಕೂಟ, ಕೊಪ್ಪ.